

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ರಾಜ್ಯಪತ್ರ**


| ಭಾಗ – **IV-A** | ಬೆಂಗಳೂರು, ಶುಕ್ರವಾರ, ಸೆಪ್ಟೆಂಬರ್ ೨೧, ೨೦೧೨ (ಭಾದ್ರಪದ ೩೦, ಶಕ ವರ್ಷ ೧೯೩೪) | ನಂ. ೬೫೮ |
|---|---|---|


**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 13 ಸಿಎಸ್‌ಎಸ್ 2010, ಬೆಂಗಳೂರು, ದಿನಾಂಕ: 18.09.2012**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ 13 ಸಿಎಸ್‌ಎಸ್ 2010 ದಿನಾಂಕ 26.05.2010ರಲ್ಲಿ **ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿಯಮಿತ., ಚಿತ್ರದುರ್ಗ** ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಆರ್.ಬಿ.ತಿಪ್ಪೇಸ್ವಾಮಿ ಬಿನ್ ಬಸಪ್ಪ, ಶ್ರೀಮತಿ ಲೋಲಾಕ್ಷಮ್ಮ ಬಿನ್ ಬೈರಪ್ಪ ಮತ್ತು ಶ್ರೀ ತಿಪ್ಪೇಸ್ವಾಮಿ ಬಿನ್ ರಾಮಪ್ಪ ಇವರ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರೆದು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು **ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿಯಮಿತ., ಚಿತ್ರದುರ್ಗ** ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಸರ್ಕಾರದ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡುತ್ತದೆ.

1. **ಶ್ರೀ ಹೆಚ್. ನಿರಂಜನಮೂರ್ತಿ ಬಿನ್ ಹೆಚ್.ಬಿ.ಹಾಲಪ್ಪ, ಅನ್ನೇಹಾಳ್ ಅಂಚೆ, ಚಿತ್ರದುರ್ಗ ತಾ. & ಜಿಲ್ಲೆ.**
2. **ಶ್ರೀಮತಿ ಲೋಲಾಕ್ಷಮ್ಮ ಕೋಂ ಬೈರಪ್ಪ, ಯಮ್ಮನಗಟ್ಟ, ಚಿತ್ರದುರ್ಗ ತಾ. & ಜಿಲ್ಲೆ.**
3. **ಶ್ರೀ ಜಯಣ್ಣ ಬಿನ್ ಪಾಲಯ್ಯ, ಮಲ್ಲಾಪುರ, ಚಿತ್ರದುರ್ಗ ತಾ. & ಜಿಲ್ಲೆ.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎಸ್. ರಮಣರೆಡ್ಡಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

# ವಿಶೇಷ ರಾಜ್ಯಪತ್ರ

| | | |
|---|---|---|
| ಭಾಗ – **IV-A** | ಬೆಂಗಳೂರು, ಶುಕ್ರವಾರ, ಸೆಪ್ಟೆಂಬರ್ ೨೧, ೨೦೧೨ (ಭಾದ್ರಪದ ೩೦, ಶಕ ವರ್ಷ ೧೯೩೪) | ನಂ. ೬೫೯ |

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 54 ಸಿಎಸ್‌ಎಸ್ 2009, ಬೆಂಗಳೂರು, ದಿನಾಂಕ: 20.09.2012**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ 54 ಸಿಎಸ್‌ಎಸ್ 2009 ದಿನಾಂಕ:28.04.2010ರಲ್ಲಿ **ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳ ನಿ., ಬೆಂಗಳೂರು** ಇದರ ಆಡಳಿತ ಮಂಡಳಿಗೆ ಮಾಡಿದ್ದ **ಶ್ರೀಮತಿ ಲತಾ ಭೈರಪ್ಪ ಕೋಂ ಹೆಚ್.ಟಿ.ಭೈರಪ್ಪ, 1ನೇ ಕ್ರಾಸ್, ಮಹಾಲಕ್ಷ್ಮೀನಗರ, ರಾಯವಾರ ರಸ್ತೆ, ಗುಬ್ಬಿ, ತುಮಕೂರು ಜಿಲ್ಲೆ** ಇವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರೆದು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು **ಕು. ಐಶ್ವರ್ಯ ಬಿನ್ ಲೇಟ್ ನಂದ್ಯಪ್ಪ, ನಂ.671, 4ನೇ ಮುಖ್ಯರಸ್ತೆ, 11ನೇ ಅಡ್ಡರಸ್ತೆ, ವೈಯಾಲಿಕಾವಲ್, ಬೆಂಗಳೂರು–03** ಇವರನ್ನು **ಕರ್ನಾಟಕ ರಾಜ್ಯ ಸಹಕಾರ ಮಹಾಮಂಡಳ ನಿ., ಬೆಂಗಳೂರು** ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಸರ್ಕಾರದ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎಸ್. ರಮಣರೆಡ್ಡಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

# ವಿಶೇಷ ರಾಜ್ಯಪತ್ರ

| | | |
|---|---|---|
| ಭಾಗ – **IV-A** | ಬೆಂಗಳೂರು, ಶನಿವಾರ, ಸೆಪ್ಟೆಂಬರ್ ೨೨, ೨೦೧೨ (ಭಾದ್ರಪದ ೩೧, ಶಕ ವರ್ಷ ೧೯೩೪) | ನಂ. ೬೬೦ |

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 18 ಸಿಎಸ್‌ಎಸ್ 2012, ಬೆಂಗಳೂರು, ದಿನಾಂಕ: 21.09.2012**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು **ಜಿಲ್ಲಾ ಕೈಗಾರಿಕಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘ ನಿಯಮಿತ., ಚಿತ್ರದುರ್ಗ** ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಸರ್ಕಾರದ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡುತ್ತದೆ.

1. **ಶ್ರೀ ನರೇಂದ್ರ ಹೆಚ್.ಬಿ. ಬಿನ್ ಬಸವರಾಜಪ್ಪ, ನಂ.82, ಜೆ.ಸಿ.ಆರ್.ಬಡಾವಣೆ, 3ನೇ ಅಡ್ಡ ರಸ್ತೆ, ಚಿತ್ರದುರ್ಗ.**

2. **ಶ್ರೀಮತಿ ಅನ್ನಪೂರ್ಣ ಸಜ್ಜನ್, ಕಂಪಳಸ್ವಾಮಿ ನಿಲಯ, ಬರಗೇರಮ್ಮ ದೇವಸ್ಥಾನದ ಹತ್ತಿರ, ಹೊಳಲ್ಕೆರೆ ರಸ್ತೆ, ಚಿತ್ರದುರ್ಗ.**

3. **ಶ್ರೀ ಹೆಚ್.ಪಾರ್ಥಸಾರಥಿ, ಜಯಶ್ರೀ ನಿಲಯ, ಕೆ.ಇ.ಬಿ.ಆಫೀಸ್ ಹಿಂಭಾಗ, ಬಿ.ಎಲ್.ಗೌಡ ನಗರ, ಹಿರಿಯೂರು ತಾ., ಚಿತ್ರದುರ್ಗ ಜಿಲ್ಲೆ.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎಸ್. ರಮಣರೆಡ್ಡಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

# ವಿಶೇಷ ರಾಜ್ಯಪತ್ರ

| ಭಾಗ – IV-A | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೨೪, ೨೦೧೨ (ಆಶ್ವಯುಜ ೨, ಶಕ ವರ್ಷ ೧೯೩೪) | ನಂ. ೬೬೩ |
|---|---|---|

## LABOUR SECRETARIAT

### NOTIFICATION

**No. LD 201 LET 2012, Bangalore, Dated: 24-09-2012**

In exercise of the powers conferred by Section 14 of the Industrial Employment [Standing Orders] Act, 1946 [Central Act 20 of 1946] the Government of Karnataka, hereby exempt the Information Technology/Information Technology Enabled Services/Software Establishments from all the provisions of the said Act from the date of publication of this notification in the Official Gazette till 31-03-2013 subject to the condition that the Employers of the above establishments coming under purview of the Industrial Employment [Standing Orders] Act, 1946 shall submit their draft standing orders for the certification of Labour Commissioner before 31-12-2012.

By order and in the name of the Governor of Karnataka,

**U.N. NAGENDRA**
Under Secretary to Government,
Labour Department

# ವಿಶೇಷ ರಾಜ್ಯಪತ್ರ

| ಭಾಗ – IV-A | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೨೪, ೨೦೧೨ (ಆಶ್ವಯುಜ ೨, ಶಕ ವರ್ಷ ೧೯೩೪) | ನಂ. ೬೬೪ |
|---|---|---|

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ಅಧಿಸೂಚನೆ

**ಸಂ: ಗ್ರಾಅಪ:05:ಜಿಪಸ 2011 (P), ಬೆಂಗಳೂರು, ದಿನಾಂಕ: 12–09–2012**

ಚಿಕ್ಕಮಗಳೂರು ಜಿಲ್ಲಾ ಪಂಚಾಯತಿ ವ್ಯಾಪ್ತಿಯ ಕಡೂರು ತಾಲ್ಲೂಕಿನ 12–ಸರಸ್ವತಿಪುರ ಜಿಲ್ಲಾಪಂಚಾಯತಿ ಮತಕ್ಷೇತ್ರದ ಜಿಲ್ಲಾ ಪಂಚಾಯತಿ ತೆರವಾದ ಸದಸ್ಯ ಸ್ಥಾನವೆಂದು ಘೋಷಿಸಿರುವುದರಿಂದ 1993 ರ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಯನ್ನು ನಡೆಸುವ) ನಿಯಮಗಳು, 12ನೇ ನಿಯಮದ ಉಪನಿಯಮ (2) ರ ಮೇರೆಗೆ ಚಿಕ್ಕಮಗಳೂರು ಜಿಲ್ಲಾಧಿಕಾರಿಯವರು ದಿನಾಂಕ: 10–01–2012 ರಂದು ಚಿಕ್ಕಮಗಳೂರು ಜಿಲ್ಲಾ ಪಂಚಾಯತಿಗೆ ಉಪ ಚುನಾವಣೆಯನ್ನು ನಡೆಸಲಾದುದರಿಂದ;

ಮತ್ತು ಸದರಿ ಜಿಲ್ಲಾ ಪಂಚಾಯತಿಯ ಮತ ಕ್ಷೇತ್ರದಲ್ಲಿ ನಡೆಸಲಾದ ಉಪ ಚುನಾವಣೆಯ ಫಲಿತಾಂಶವನ್ನು ಸಂಬಂಧಪಟ್ಟ ಚುನಾವಣಾಧಿಕಾರಿಗಳು ಘೋಷಿಸಿರುವುದರಿಂದ,

ಆದುದರಿಂದ 1993 ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ (1993ರ ಕರ್ನಾಟಕ ಅಧಿನಿಯಮ 14) 172ನೇ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಚಿಕ್ಕಮಗಳೂರು ಜಿಲ್ಲಾ ಪಂಚಾಯತಿಯಲ್ಲಿ ಉಂಟಾದ ಖಾಲಿ ಸ್ಥಾನವನ್ನು ಭರ್ತಿ ಮಾಡಲು ಅವನು ಯಾರ ಸ್ಥಾನದಲ್ಲಿ ಚುನಾಯಿತನಾಗಿರುವನೋ ಆ ಸ್ಥಾನವು ತೆರವಾಗದೇ ಇದ್ದಿದ್ದರೆ ಆ ಸದಸ್ಯನು ಎಲ್ಲಿಯವರೆಗೆ ಹುದ್ದೆಯನ್ನು ಧಾರಣ ಮಾಡುತ್ತಿದ್ದನೋ ಆ ಅವಧಿಯವರೆಗೆ ಮಾತ್ರ ಹುದ್ದೆಯನ್ನು ಧಾರಣ ಮಾಡತಕ್ಕದ್ದು ಎಂದು ನಮೂದಿಸಿರುವುದರಿಂದ ಕರ್ನಾಟಕ ಸರ್ಕಾರವು ಉಳಿದ ಅವಧಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಕೆಳಗೆ ನಮೂದಿಸಿದಂತೆ ಅಧಿಸೂಚಿಸಿದೆ.

| ಕ್ರ ಸಂ. | ಜಿಲ್ಲಾ ಪಂಚಾಯತಿ ಕ್ಷೇತ್ರದ ಹೆಸರು | 2011ನೇ ಸಾಲಿಗೆ ನಿಗಧಿಪಡಿಸಿರುವ ಮೀಸಲಾತಿ ವರ್ಗ | ಆಯ್ಕೆಯಾದ ಸದಸ್ಯರ ಹೆಸರು ಶ್ರೀ : ಶ್ರೀಮತಿ | ಪ್ರತಿನಿಧಿಸಿದ ರಾಜಕೀಯ ಪಕ್ಷದ ಹೆಸರು |
|---|---|---|---|---|
| | **ಚಿಕ್ಕಮಗಳೂರು** | | | |
| 1 | 12 – ಸರಸ್ವತಿಪುರ ಜಿಲ್ಲಾ ಪಂಚಾಯತಿ ಕ್ಷೇತ್ರ | ಹಿಂದುಳಿದ ಅ ವರ್ಗ | ಶ್ರೀ ಬಿ.ಪಿ.ನಾಗರಾಜ್ ಬಿನ್ ಲೇ:ಪುಟ್ಟಪ್ಪ, ಕರಗಲ್ ಬೀದಿ, ಅಂತರಘಟ್ಟಮ್ಮ ದೇವಸ್ಥಾನದ ಹತ್ತಿರ, ಬೀರೂರು ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ. | ಜನತಾ ದಳ (ಜಾತ್ಯಾತೀತ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಾರ್ಗರೇಟ್ ಲೀನಾ ನರೋನ್ಹ**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

# ವಿಶೇಷ ರಾಜ್ಯಪತ್ರ

| ಭಾಗ – IV-A | ಬೆಂಗಳೂರು, ಮಂಗಳವಾರ, ಸೆಪ್ಟೆಂಬರ್ ೨೫, ೨೦೧೨ (ಆಶ್ವಯುಜ ೩, ಶಕ ವರ್ಷ ೧೯೩೪) | ನಂ. ೬೬೫ |
|---|---|---|

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 19 ಸಿಎಸ್‌ಎಸ್ 2012, ಬೆಂಗಳೂರು, ದಿನಾಂಕ: 25.09.2012**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 29ರ ಉಪ ಪ್ರಕರಣ(1)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು **ಕರ್ನಾಟಕ ರಾಜ್ಯ ರೇಷ್ಮೆ ಸಹಕಾರ ಮಾರಾಟ ಮಹಾಮಂಡಳ ನಿ., ಬೆಂಗಳೂರು** ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಸರ್ಕಾರದ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡುತ್ತದೆ.

1. **ಶ್ರೀ ಬಿ.ಅಣ್ಣೇಗೌಡ ಬಿನ್ ಲೇ.ಬೆಟ್ಟಸ್ವಾಮಿ ಗೌಡ, ಯಲ್ಲಾಪುರ, ಹುಲ್ಲೇನಹಳ್ಳಿ ಪೋಸ್ಟ್, ತಿಪ್ಪಸಂದ್ರ ಹೋಬಳಿ, ಮಾಗಡಿ ತಾ., ರಾಮನಗರ ಜಿಲ್ಲೆ.**
2. **ಶ್ರೀ ಶಿವಕುಮಾರಸ್ವಾಮಿ ಬಿನ್ ಶಿವಣ್ಣ, ನಂ. 3581, ಟ್ರೂಪಲೈನ್, ವಾರ್ಡ್ ನಂ.111, ರಾಮನಗರ ಟೌನ್, ರಾಮನಗರ.**
3. **ಶ್ರೀಮತಿ ಸವಿತಾ ಸಿ. ಕೋಂ ಹೆಚ್.ಎನ್.ನಟೇಶ್, ಹಿರೇಬಿದನೂರು ತಾ., ಚಿಕ್ಕಬಳ್ಳಾಪುರ ಜಿಲ್ಲೆ.**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎಸ್. ರಮಣರೆಡ್ಡಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

# ವಿಶೇಷ ರಾಜ್ಯಪತ್ರ

| | | |
|---|---|---|
| ಭಾಗ – **IV-A** | ಬೆಂಗಳೂರು, ಮಂಗಳವಾರ, ಸೆಪ್ಟೆಂಬರ್ ೨೫, ೨೦೧೨ (ಆಶ್ವಯುಜ ೩, ಶಕ ವರ್ಷ ೧೯೩೪) | ನಂ. ೬೬೬ |

**ಸಹಕಾರ ಸಚಿವಾಲಯ**

**ತಿದ್ದುಪಡಿ ಆದೇಶ**

**ಸಂಖ್ಯೆ: ಸಇ 44 ಸಿಎನ್ಎಸ್ 2010, ಬೆಂಗಳೂರು, ದಿನಾಂಕ: 24.09.2012**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ 44 ಸಿಎನ್ಎಸ್ 2010, ದಿನಾಂಕ: 24.9.2012 ರ ಅಧಿಸೂಚನೆಯಲ್ಲಿ ಚೆನ್ನರಾಯಪಟ್ಟಣ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿಯಮಿತ, ಚೆನ್ನರಾಯಪಟ್ಟಣ ಇದರ ಆಡಳಿತ ಮಂಡಳಿಗೆ ನಾಮ ನಿರ್ದೇಶನಗೊಂಡಿರುವ ಶ್ರೀಮತಿ ಬಿ.ಎನ್.ಗೌರಮ್ಮ ಕೋಂ ಚಂದ್ರಯ್ಯ, ಅಣತಿ ಗ್ರಾಮ, ಬಾಗೂರು ಹೋಬಳಿ, ಚೆನ್ನರಾಯಪಟ್ಟಣ ತಾಲ್ಲೂಕು ಇದರಲ್ಲಿ

"ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ (11)ರ ಪ್ರಕರಣ 53–ಎ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ" ಎಂಬುದನ್ನು ಈ ಕೆಳಕಂಡಂತೆ ತಿದ್ದುಪಡಿ ಮಾಡಿದ್ದು ಅದರಂತೆ ಓದಿಕೊಳ್ಳತಕ್ಕದ್ದು.

"ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ, ಪ್ರಕರಣ 29(1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ"

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎಸ್. ರಮಣರೆಡ್ಡಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

# ವಿಶೇಷ ರಾಜ್ಯಪತ್ರ

| | | |
|---|---|---|
| ಭಾಗ – **IV-A** | ಬೆಂಗಳೂರು, ಮಂಗಳವಾರ, ಸೆಪ್ಟೆಂಬರ್ ೨೫, ೨೦೧೨ (ಆಶ್ವಯುಜ ೩, ಶಕ ವರ್ಷ ೧೯೩೪) | ನಂ. ೬೬೭ |

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 15 ಸಿಎನ್ಎಸ್ 2010, ಬೆಂಗಳೂರು, ದಿನಾಂಕ: 25.09.2012**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ 15 ಸಿಎನ್ಎಸ್ 2010 ದಿನಾಂಕ 19.03.2010ರಲ್ಲಿ **ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿಯಮಿತ., ಸೊರಬ** ಇದರ ಆಡಳಿತ ಮಂಡಳಿಗೆ ಮಾಡಿದ್ದ **ಶ್ರೀ ವಿಜಯಕುಮಾರ್ ಬಿನ್ ಕೆರಿಯಪ್ಪ, ಹೊಸಕೊಪ್ಪ, ಜಡೆಹೋಬಳಿ, ಸೊರಬ ತಾಲ್ಲೂಕು** ಇವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರೆದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 29ರ ಉಪ ಪ್ರಕರಣ(1)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು **ಶ್ರೀ ಕೆರಿಯಪ್ಪ ಬಿನ್ ಬಸಪ್ಪ ಮಳಗೇರ್, ಕೋಡಕೊಪ್ಪ, ಸೊರಬ ತಾಲ್ಲೂಕು** ಇವರನ್ನು **ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿಯಮಿತ., ಸೊರಬ** ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಸರ್ಕಾರದ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎಸ್. ರಮಣರೆಡ್ಡಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

# ವಿಶೇಷ ರಾಜ್ಯಪತ್ರ

| ಭಾಗ – IV-A | ಬೆಂಗಳೂರು, ಮಂಗಳವಾರ, ಸೆಪ್ಟೆಂಬರ್ ೨೫, ೨೦೧೨ (ಆಶ್ವಯುಜ ೩, ಶಕ ವರ್ಷ ೧೯೩೪) | ನಂ. ೬೬೮ |
|---|---|---|

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 261 ಎಂಎಲ್ಆರ್ 2012, ಬೆಂಗಳೂರು, ದಿನಾಂಕ: 24.09.2012**

1979ರ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ (ಚುನಾವಣೆ) ನಿಯಮಾವಳಿಯ 68ನೇ ನಿಯಮದೊಂದಿಗೆ ಓದಲಾದ 1976ರ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ ನಿಯಮಗಳ ಅಧಿನಿಯಮ (1977ರ ಕರ್ನಾಟಕ ಅಧಿನಿಯಮ ಸಂಖ್ಯೆ: 14) ರ 32ನೇ ಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ದಿನಾಂಕ: 5.8.2012 ರಂದು ನಡೆದ ಉಪ ಚುನಾವಣೆಯಲ್ಲಿ ಹುಬ್ಬಳ್ಳಿ – ಧಾರವಾಡ ಮಹಾನಗರ ಪಾಲಿಕೆಗೆ ಚುನಾಯಿತರಾದ ಅಭ್ಯರ್ಥಿಯ ಹೆಸರನ್ನು ಈ ಮೂಲಕ ಸಾರ್ವಜನಿಕ ಮಾಹಿತಿಗಾಗಿ ಪ್ರಕಟಿಸಲಾಗಿದೆ.

| ವಾರ್ಡ್ ಸಂಖ್ಯೆ ಹೆಸರು | ಚುನಾಯಿತ ಅಭ್ಯರ್ಥಿಯ ಹೆಸರು | | ಅಭ್ಯರ್ಥಿಯ ಪಕ್ಷ |
|---|---|---|---|
| | ಹೆಸರು | ವಿಳಾಸ | |
| 47 | ಶ್ರೀಮತಿ ಸ್ಮಿತಾ ಜಾಧವ್ | ನಂ. 368/162ಎ, ರಾಮನಗರ, ಗದಗ್ ರೋಡ್, ಹುಬ್ಬಳ್ಳಿ | ಭಾರತೀಯ ಜನತಾ ಪಕ್ಷ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಕೆ.ವಿ. ರಾಮಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

# ವಿಶೇಷ ರಾಜ್ಯಪತ್ರ

| ಭಾಗ – IV-A | ಬೆಂಗಳೂರು, ಮಂಗಳವಾರ, ಸೆಪ್ಟೆಂಬರ್ ೨೫, ೨೦೧೨ (ಆಶ್ವಯುಜ ೩, ಶಕ ವರ್ಷ ೧೯೩೪) | ನಂ. ೬೬೯ |
|---|---|---|

## PERSONNEL AND ADMINISTRATIVE REFORMS SECRETARIAT

### NOTIFICATION

**No. DPAR 57 SSC 2010, Bangalore, Dated: 24.09.2012**

In exercise of the powers conferred by Article 318 of the Constitution of India, the Governor of Karnataka hereby make the following regulations, further to amend the Karnataka Public Service Commission (Conditions of Service) Regulations, 1957, namely:-

**1. Title and Commencement:-** (1) These regulations may be called the Karnataka Public Service Commission (Conditions of Service) (Amendment) Regulations, 2012.

(2) They shall come into force from the date of their publication in the Official Gazette.

**2. Amendment of Annexure-I**:- In Annexure–I to the Karnataka Public Service Commission (Conditions of Service) Regulations, 1957, -

(1) in the entries relating to the category of post of **"Assistant Secretary"** at serial No. 6, in column 4, for the figure **"15",** the figure **"16"** shall be substituted.

(2) in the entries relating to the category of post of "**Section Officer/P.R.O**" at Serial No. 8, in column 4, for the figure **"25"** the figure **"26"** shall be substituted.

(3) in the entries relating to the category of post of **"Assistant/Accountant/ Receptionists"** at serial No. 12, in column 4, for the figure "**74**" the figure **"75"** shall be substituted.

(4) in the entries relating to the category of post of "**Junior Assistant**" at serial No. 16, in column 4 for the figure **"46"** the figure **"48"** shall be substituted.

(5) in the entries relating to the category of post of **"Typist"** at serial No. 18, in column 4, for the figure **"11"** the figure **"12"** shall be substituted.

(6) in the entries relating to the category of post of **"Driver"** at Serial No. 19, in column 4**,** for the figure **"11"** the figure **"12"** shall be substituted and

(7) in the entries relating to the category of post of "**Dalayat/Watchman/Home Orderly/Sweeper**" at serial No. 21, in column 4, for the figure **"43"** the figure **"45"** shall be substituted.

By Order and in the name of the Governor of Karnataka,

**Dr. MANGALA .G.S.**
Under Secretary to Government,
Department of Personnel and Administrative Reforms
(Service Rules)

# ವಿಶೇಷ ರಾಜ್ಯಪತ್ರ

| ಭಾಗ – IV-A | ಬೆಂಗಳೂರು, ಮಂಗಳವಾರ, ಸೆಪ್ಟೆಂಬರ್ ೨೫, ೨೦೧೨ (ಆಶ್ವಯುಜ ೩, ಶಕ ವರ್ಷ ೧೯೩೪) | ನಂ. ೬೨೦ |
|---|---|---|

## PERSONNEL AND ADMINISTRATIVE REFORMS SECRETARIAT

### NOTIFICATION

### No. DPAR 87 SSC 2011, Bangalore, dated: 24.09.2012

In exercise of the powers conferred by Article 318 of the Constitution of India, the Governor of Karnataka hereby makes the following regulations further to amend the Karnataka Public Service Commission (Conditions of Service) Regulations, 1957, namely:-

**1. Title and Commencement:-**(1) These regulations may be called the Karnataka Public Service Commission (Conditions of Service) (Amendment) Regulations, 2012.

(2) They shall come into force from the date of their publication in the official Gazette.

**2. Amendment of Annexure 1A:-** In the Karnataka Public Service Commission (Conditions of Service) Regulations, 1957, in Annexure **1A**, for the entries relating to the category of post of "Section Officer including Private Secretary to Chairman" the following shall be substituted, namely:-

| | | |
|---|---|---|
| Section Officer including Private Secretary to Chairman | "Twenty Five Percent by direct recruitment in accordance with the Karnataka Recruitment of Gazetted Probationers (Appointment by Competitive Examinations) Rules 1997, and<br><br>Seventy Five percent by Promotion from the cadre of Senior Assistant. | **For Promotion:-**<br>Must have put in a service of not less than five years in the cadre of Senior Assistant.<br><br>Provided that if persons who have put in a service of not less than five years are not available, persons who have put in a service of not less than three years may be considered. |

By Order and in the name of the Governor of Karnataka,

**Dr. MANGALA .G.S.**
Under Secretary to Government,
Department of Personnel and Administrative Reforms
(Service Rules)

ವಿಶೇಷ ರಾಜ್ಯಪತ್ರ

| ಭಾಗ – IV-A | ಬೆಂಗಳೂರು, ಮಂಗಳವಾರ, ಸೆಪ್ಟೆಂಬರ್ ೨೫, ೨೦೧೨ (ಆಶ್ವಯುಜ ೩, ಶಕ ವರ್ಷ ೧೯೩೪) | ನಂ. ೬೨೧ |
|---|---|---|

## HIGH COURT OF KARNATAKA

### NOTIFICATION

### NO. HCE 6/2009, BANGALORE, DATED : 24TH SEPTEMBER, 2012

### THE HIGH COURT OF KARNATAKA SERVICE (CONDITIONS OF SERVICE AND RECRUITMENT) (II AMENDMENT) RULES, 2012

In exercise of powers conferred by Article 229 (1) and (2) of the Constitution of India, read with 6, 7 & 11 of High Court of Karnataka Service (Conditions of Service and Recruitment) Rules, 1973, and all other powers enabling hereunto, Hon'ble the Chief Justice makes the following rules to amend the High Court of Karnataka Service (Conditions of Service and Recruitment) Rules, 1973, (hereinafter referred to as the "Principal Rules").

**Title and Commencement:** (1) These Rules may be called as the High Court Service (Conditions of Service and Recruitment) (II Amendment) Rules, 2012.

(2) They shall come into force from the date of publication in the Karnataka Gazette.

**Amendment to Schedule-III –** Schedule III appended to the Principal Rules shall be amended as follows:-

"Under the heading Group-C against Sl. No. 21 (Stenographer) under column no. 3, the following entries shall be inserted for the existing rules".

| Sl. No. | Cadre Name | Method of recruitment |
|---|---|---|
| 1 | 2 | 3 |
| 21 | Stenographer | **OR**<br>Diploma in Commercial Practice/Equivalent Exams from the recognised Institute with First Class in Senior Grade in English Short hand |

**BY ORDER OF HON'BLE THE CHIEF JUSTICE,**
**Sd/-**
**P. KRISHNA BHAT**
REGISTRAR GENERAL,
HIGH COURT OF KARNATAKA

ವಿಶೇಷ ರಾಜ್ಯಪತ್ರ

| ಭಾಗ – IV-A | ಬೆಂಗಳೂರು, ಮಂಗಳವಾರ, ಸೆಪ್ಟೆಂಬರ್ ೨೫, ೨೦೧೨ (ಆಶ್ವಯುಜ ೩, ಶಕ ವರ್ಷ ೧೯೩೪) | ನಂ. ೬೨೨ |
|---|---|---|

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಕಾಇ 40 ಎಲ್ಎಂಡಬ್ಲ್ಯೂ 2012, ಬೆಂಗಳೂರು, ದಿನಾಂಕ: 25–09–2012

ಕನಿಷ್ಠ ವೇತನ ಕಾಯ್ದೆ 1948 ರ (ಕೇಂದ್ರ ನಿಯಮ ಸಂಖ್ಯೆ: XI) ಪರಿಚ್ಛೇಧ 3(1)(ಬಿ) ಮತ್ತು 5(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯಾದ್ಯಂತ **"ಬಟ್ಟೆಗಳಿಗೆ ಡೈ ಮಾಡಿ ಪ್ರಿಂಟ್ ಹಾಕುವ"** ಉದ್ದಿಮೆಗಳಲ್ಲಿ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ ಪ್ರಥಮ ಬಾರಿಗೆ ಕನಿಷ್ಠ ವೇತನವನ್ನು ನಿಗಧಿಪಡಿಸಲು ಸರ್ಕಾರ ತೀರ್ಮಾನಿಸಿದೆ. ಈ ಕರಡು ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ 2 ತಿಂಗಳ ಅವಧಿಯೊಳಗೆ ಭಾದಿತರಾಗುವ ವ್ಯಕ್ತಿಗಳು ಸಲಹೆ/ ಆಕ್ಷೇಪಣೆಗಳನ್ನು ಸರ್ಕಾರದ ಕಾರ್ಯದರ್ಶಿ, ಕಾರ್ಮಿಕ ಇಲಾಖೆ, ವಿಕಾಸ ಸೌಧ, ಬೆಂಗಳೂರು–01 ಇವರಿಗೆ ಅಥವಾ ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29 ಇವರಿಗೆ ಸಲ್ಲಿಸತಕ್ಕದ್ದು. ತದನಂತರ ಬಂದ ಸಲಹೆ/ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

**ಅನುಸೂಚಿ**

| ಕ್ರ ಸಂ | ಕೆಲಸದ ವರ್ಗಗಳು | ಕನಿಷ್ಟ ವೇತನ ದರಗಳು | |
|---|---|---|---|
| | | ಪ್ರತಿ ತಿಂಗಳಿಗೆ | ಪ್ರತಿ ದಿನಕ್ಕೆ |
| I | **ಅತಿ ಕುಶಲ** | | |
| 1 | ಮ್ಯಾನೇಜರ್/ಪ್ರೊಡಕ್ಷನ್ ಮ್ಯಾನೇಜರ್/ಪ್ರಿಂಟಿಂಗ್ ಮ್ಯಾನೇಜರ್ | 6750–00 | 260–00 |
| 2 | ಸೂಪರ್‌ವೈಸರ್/ಅಸಿಸ್ಟೆಂಟ್ ಮ್ಯಾನೇಜರ್ | 6500–00 | 250–00 |
| 3 | ಡಿಸೈನರ್/ಪ್ರಿಂಟರ್ಸ್ | 6318–00 | 243–00 |
| 4 | ಕೆಮಿಕಲ್ಸ್ ಮಿಶ್ರಣ ಮಾಡುವವರು | 6162–00 | 237–00 |
| 5 | ನೂಲನ್ನು ಕೆಮಿಕಲ್ಸ್‌ನಲ್ಲಿ ಬೇಯಿಸುವವರು | | |
| II | **ಕುಶಲ ಕೆಲಸಗಾರರು** | | |
| 1 | ಇಲೆಕ್ಟ್ರೀಷಿಯನ್ | 6006–00 | 231–00 |
| 2 | ವೈಂಡರ್/ಫಿಟ್ಟರ್/ಫೈರ್‌ಮನ್ | 5900–00 | 227–00 |
| 3 | ಸ್ಪಿನ್ನಿಂಗ್/ಸ್ಪಿನ್ನಿಂಗ್ ಮೆಂಟೆನನ್ಸ್ | 5800–00 | 223–00 |
| 4 | ಕಾರ್ಡಿನ್/ಜೋನ್ ಕ್ಲಿಯರಿಂಗ್ | | |
| 5 | ನೂಲನ್ನು ಹದ ಮಾಡುವವರು | 5720–00 | 220–00 |
| 6 | ಬಣ್ಣ ಹಾಕುವವರು | | |
| 7 | ರೋಟರ್ ಆಪರೇಟರ್/ ರೋಲ್ ಕವರರ್ಸ್ | 5616–00 | 216–00 |
| 8 | ಟ್ರೆಶರ್ಸ್ | | |
| III | **ಅರೆಕುಶಲ** | | |
| 1 | ಪ್ರಿಟಿಂಗ್ ಸಹಾಯಕ /ಸಹಾಯಕ ಆಪರೇಟರ್ | 5408–00 | 208–00 |
| 2 | ನೂಲು ಬಿಡಿಸುವವರು/ಟೇಪ್ ಮ್ಯಾನ್ | | |
| 3 | ಪ್ಯಾಕರ್ | | |
| IV | **ಕುಶಲರಲ್ಲದವರು** | | |
| 1 | ಸಿನ್ನಿಂಗ್ ಹೆಲ್ಪರ್ಸ್/ ಪ್ಯಾಕರ್ಸ್ | 5122–00 | 197–00 |
| 2 | ಮಿಕ್ಸರ್ಸ್/ಪ್ರೇಂ ಕೂಲೀಸ್/ಡ್ರೈಯರ್ಸ್ | | |
| 3 | ಹೆಲ್ಪರ್ಸ್/ಕ್ಲಿನರ್ಸ್ | 4950–00 | 190–38 |
| V | **ಡ್ರೈವರ್ಸ್** | | |
| 1 | ಲಾರಿ ಡ್ರೈವರ್ | 5876–00 | 226–00 |
| 2 | ಕಾರ್/ಜೀಪ್ ಡ್ರೈವರ್ | 5486–00 | 211–00 |
| 3 | ಲಾರಿ/ಕಾರ್/ಜೀಪ್ ಕ್ಲೀನರ್ | 4966–00 | 191–00 |
| VI | **ಕಛೇರಿ ಸಿಬ್ಬಂದಿ** | | |
| 1 | ಮ್ಯಾನೇಜರ್/ ಪರ್ಸನಲ್ ಆಫೀಸರ್ | 6750–00 | 260–00 |
| 2 | ಅಸಿಸ್ಟೆಂಟ್ ಮ್ಯಾನೇಜರ್/ಅಸಿಸ್ಟೆಂಟ್ ಪರ್ಸನಲ್ ಮ್ಯಾನೇಜರ್ | 6500–00 | 250–00 |
| 3 | ಅಕೌಟೆಂಟ್ / ಕ್ಲರ್ಕ್ / ಕ್ಯಾಷಿಯರ್/ಸ್ಟೋರ್ ಕೀಪರ್ | 6100–00 | 234–61 |
| 4 | ಕಂಪ್ಯೂಟರ್ ಆಪರೇಟರ್/ಬೆರಳಚ್ಚುಗಾರರು/ ಸ್ವಾಗತಕಾರರು | 5950–00 | 228–84 |
| 5 | ಪ್ಯೂನ್/ವಾಚಮನ್/ಜವಾನ/ಸ್ವಿಪರ್/ ಗಾರ್ಡನರ್ | 4950–00 | 190–38 |

**ತುಟ್ಟಿಭತ್ಯೆ:–**

ಈ ಅಧಿಸೂಚನೆಯಲ್ಲಿ ಪ್ರಕಟಿಸಿರುವ ದರಗಳು ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ (1960–100) 4624 ಅಂಶಗಳಿಗೆ ವಿಲೀನಗೊಳಿಸಲಾಗಿದೆ. ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 4624 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿ ಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2011 ರಿಂದ ಡಿಸೆಂಬರ್ 2011)ರ ಸರಾಸರಿ ಆಧಾರದ ಮೇಲೆ 2012 ಏಪ್ರಿಲ್ 1 ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

**ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:–**

**ಅ) ಮಾಸಿಕ ವೇತನವನ್ನು ಪಡೆಯುವವರು:–**

ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು= ತುಟ್ಟಿಭತ್ಯೆ

**ಆ) ದಿನಗೂಲಿ ವೇತನ ಪಡೆಯುವವರು :–**

ಪ್ರತಿ ವರ್ಷ ಹೆಚ್ಚಾಗುವ ಅಂಶಗಳು x ತುಟ್ಟಿಭತ್ಯೆಯ ದರ x 30 = ದಿನದ ತುಟ್ಟಿಭತ್ಯೆ

26

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು.

3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ದರಗಳ ವೇತನವನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು ಹಾಗೂ ಕಡ್ಡಾಯವಾಗಿ ಪ್ರತಿ ವರ್ಷ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಸಹ ಪಾವತಿಸತಕ್ಕದ್ದು.

4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.

5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ದಿನಗಳಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸುವುದು.

7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.

8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.

9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

11. ಈ ಅಧಿಸೂಚನೆಯಲ್ಲಿ ನಿಗಧಿಪಡಿಸಿರುವ ವೇತನ ದರಗಳನ್ನು ಮತ್ತು ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಆಯಾ ಅಂಕಣಗಳಲ್ಲಿಯೇ ನಮೂದಿಸಿ ಪಾವತಿ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಪ್ರಭುದೇವ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ
ದೂರವಾಣಿ: 22034972

# ವಿಶೇಷ ರಾಜ್ಯಪತ್ರ

| ಭಾಗ – IV-A | ಬೆಂಗಳೂರು, ಮಂಗಳವಾರ, ಸೆಪ್ಟೆಂಬರ್ ೨೫, ೨೦೧೨ (ಆಶ್ವಯುಜ ೩, ಶಕ ವರ್ಷ ೧೯೩೪) | ನಂ. ೬೨೪ |
|---|---|---|

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಎಫ್‌ಡಿ 6 ಎಸ್ ಆರ್ ಎ 2012, ಬೆಂಗಳೂರು, ದಿನಾಂಕ: 24.09.2012**

ಕರ್ನಾಟಕ ಸರ್ಕಾರವು ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14)ರ 8ನೇ ಪ್ರಕರಣದೊಂದಿಗೆ ಓದಲಾದ 3ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ರಚಿಸಲು ಉದ್ದೇಶಿಸಿದ, ಕರ್ನಾಟಕ ಸಿವಿಲ್ ಸೇವಾ ನಿಯಮಗಳನ್ನು ಮತ್ತಷ್ಟು ತಿದ್ದುಪಡಿ ಮಾಡುವ ಈ ಮುಂದಿನ ನಿಯಮಗಳ ಕರಡನ್ನು ಸದರಿ ಅಧಿನಿಯಮದ 3ನೇ ಪ್ರಕರಣದ 2ನೇ ಉಪ ಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ, ಇದರಿಂದ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ ಮತ್ತು ಸದರಿ ಕರಡನ್ನು ಅಧಿಕೃತ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಹದಿನೈದು ದಿನಗಳ ತರುವಾಯ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ಸೂಚನೆ ನೀಡಲಾಗಿದೆ.

ಸದರಿ ಕರಡು ನಿಯಮಗಳಿಗೆ ಸಂಬಂಧಿಸಿದಂತೆ ಮೇಲೆ ನಿರ್ದಿಷ್ಟಪಡಿಸಿದ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ಯಾರೇ ವ್ಯಕ್ತಿಯಿಂದ ರಾಜ್ಯ ಸರ್ಕಾರವು ಸ್ವೀಕರಿಸಬಹುದಾದ ಯಾವುದೇ ಆಕ್ಷೇಪಣೆ ಅಥವಾ ಸಲಹೆಯನ್ನು ರಾಜ್ಯ ಸರ್ಕಾರವು ಪರಿಗಣಿಸುವುದು. ಆಕ್ಷೇಪಣೆಗಳು ಮತ್ತು ಸಲಹೆಗಳನ್ನು, ಕರ್ನಾಟಕ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ವಿಧಾನ ಸೌಧ, ಬೆಂಗಳೂರು–560 001, ಇವರಿಗೆ ಸಲ್ಲಿಸಬಹುದು.

### ಕರಡು ನಿಯಮಗಳು

**1. ಹೆಸರು ಮತ್ತು ಪ್ರಾರಂಭ:–**

(1) ಈ ನಿಯಮಗಳನ್ನು ಕರ್ನಾಟಕ ಸಿವಿಲ್ ಸೇವೆಗಳ (ಮೂರನೇ ತಿದ್ದುಪಡಿ) ನಿಯಮಗಳು 2012 ಎಂದು ಕರೆಯತಕ್ಕದ್ದು.

(2) ಇವು ಅಧಿಕೃತ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ನಿಯಮ 224–ಬಿ ತಿದ್ದುಪಡಿ:–** ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 224–ಬಿ ರ ಉಪ ನಿಯಮ (1)ರಲ್ಲಿ "ಈ ನಿಯಮ ಜಾರಿಗೆ ಬಂದ ದಿನಾಂಕದಿಂದ ಆರು ವರ್ಷಗಳ ಒಳಗೆ" ಎಂಬ ಅಕ್ಷರಗಳನ್ನು "ಕರ್ನಾಟಕ ಸಿವಿಲ್ ಸೇವೆಗಳ (ಮೂರನೇ ತಿದ್ದುಪಡಿ) ನಿಯಮಗಳು 2012, ಜಾರಿಗೆ ಬಂದ ದಿನಾಂಕದಿಂದ ಒಂದು ವರ್ಷದ ಒಳಗೆ" ಎಂಬ ಅಕ್ಷರಗಳಿಂದ ಪ್ರತಿಸ್ಥಾಪಿಸತಕ್ಕದ್ದು.

ತಿದ್ದುಪಡಿ ಸಂ: 1274

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆಲಿಸ್ ಗೊನ್ಸಾಲ್ವಿಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು–1)

## FINANCE SECRETARIAT

### NOTIFICATION

**No. FD 06 SRA 2012, Bangalore, Dated: 24.09.2012**

The draft of the following rules further to amend the Karnataka Civil Service Rules, which the Government of Karnataka proposes to make in exercise of the powers conferred by sub-section (1) of Section 3 read with section 8 of the Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section (2) of section 3 of the said Act, for the information of all the persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Additional Chief Secretary to Government, Finance Department, Karnataka Government Secretariat, Vidhana Soudha, Bangalore – 560 001.

**DRAFT RULES**

**1. Title and Commencement:**

(1) These rules may be called the Karnataka Civil Services (3rd amendment) Rules, 2012.

(2) They shall come into force from the date of their publication in the Official Gazette.

**2. Amendment of Rule 224-B:-** In the Karnataka Civil Service Rules, in rule 224B, in sub-rule (1), for the words “within Six years from the date of effect of this rule” the words “within one Year from the date of commencement of the Karnataka Civil Services (3rd Amendment) Rules, 2012” shall be substituted.

C.S.No.1274

By Order and in the name of the Governor of Karnataka,

**ALICE GONSALVES**
Under Secretary to Government,
Finance Dept. (Services-1)

# ವಿಶೇಷ ರಾಜ್ಯಪತ್ರ

| ಭಾಗ – IV-A | ಬೆಂಗಳೂರು, ಬುಧವಾರ, ಸೆಪ್ಟೆಂಬರ್ ೨೬, ೨೦೧೨ (ಆಶ್ವಯುಜ ೪, ಶಕ ವರ್ಷ ೧೯೩೪) | ನಂ. ೬೭೫ |
|---|---|---|

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 18 ಸಿಎಸ್‌ಎಸ್ 2008, ಬೆಂಗಳೂರು, ದಿನಾಂಕ: 25.09.2012**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಪ್ರಕರಣ 29(1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಬೆಳಗಾವಿ ಜಿಲ್ಲಾ ತೋಟಗಾರಿಕೆ ಬೆಳೆಗಾರರ ಸಹಕಾರಿ ಮಾರಾಟ ಮತ್ತು ಸಂಸ್ಕರಣ ಸಂಘ ನಿಯಮಿತ, ಬೆಳಗಾವಿ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡುತ್ತದೆ.

1. ಶ್ರೀ ಮಾರುತಿ ಲಕ್ಷ್ಮಣ ಕೋಳೇಕರ, ಹಣಬರವಾಡಿ–ಕೊಗನೊಳ್ಳಿ, ಚಿಕ್ಕೋಡಿ ತಾಲ್ಲೂಕು, ಬೆಳಗಾವಿ ಜಿಲ್ಲೆ.
2. ಶ್ರೀಮತಿ ಮೀನಾಕ್ಷಿ ಈಶ್ವರ ಗುಡಿಮನಿ, ದೇಸೂರು, ಬೆಳಗಾವಿ ತಾಲ್ಲೂಕು ಮತ್ತು ಜಿಲ್ಲೆ.
3. ಶ್ರೀಮತಿ ಶಿವಾಜಿ ವಸಂತ ಕೆಂಚೆ, ಯಡ್ರಾವ, ರಾಯಭಾಗ ತಾಲ್ಲೂಕು, ಬೆಳಗಾವಿ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಎಸ್. ರಮಣರೆಡ್ಡಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

# ವಿಶೇಷ ರಾಜ್ಯಪತ್ರ

| ಭಾಗ – **IV-A** | ಬೆಂಗಳೂರು, ಬುಧವಾರ, ಸೆಪ್ಟೆಂಬರ್ ೨೬, ೨೦೧೨ (ಆಶ್ವಯುಜ ೪, ಶಕ ವರ್ಷ ೧೯೩೪) | ನಂ. ೬೨೬ |
|---|---|---|

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 80 ಸಿಎಸ್‌ಎಸ್ 2010, ಬೆಂಗಳೂರು, ದಿನಾಂಕ: 25.09.2012**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ 80 ಸಿಎಸ್‌ಎಸ್ 2010, ದಿನಾಂಕ: 15.4.2010 ರಲ್ಲಿ ಮಾಡಿರುವ ಶ್ರೀ ಕೆ.ಟಿ.ಜಯರಾಮಯ್ಯ, ಶ್ರೀ ರಾಜಣ್ಣ ಮತ್ತು ಶ್ರೀಮತಿ ಎಸ್.ವಿ. ಸುಜಾತಾ ಇವರ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ಪ್ರಕರಣ 29(1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರ ಈ ಕೆಳಕಂಡ ವ್ಯಕ್ತಿಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಹಕಾರ ಒಕ್ಕೂಟ ನಿಯಮಿತ, ಬೆಂಗಳೂರು ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡುತ್ತದೆ.

1. ಶ್ರೀ ಪ್ರಭಾಕರ ಬಿನ್ ಲೇಟ್ ಎ.ವಿ.ರುದ್ರಪ್ಪ, ಬೂದಿಗೆರೆ ಗ್ರಾಮ, ದೇವನಹಳ್ಳಿ ತಾಲ್ಲೂಕು.
2. ಶ್ರೀಮತಿ ಸೌಮ್ಯ ಕೋಂ ಗೋಪಾಲಕೃಷ್ಣ ರಾವ್, ಗೋವಿಂದಪ್ಪ ಲೇಔಟ್, ಸುಭಾಷ್ ನಗರ, ನೆಲಮಂಗಲ.
3. ಶ್ರೀ ಮಹದೇವ್ ಬಿನ್ ಗಿರಿಯಪ್ಪ, ಸೋಮೇಶ್ವರ ಸಮುದಾಯ ಭವನದ ಎದುರಿಗೆ, ದೊಡ್ಡಮ್ಮ ದೇವಸ್ಥಾನದ ರಸ್ತೆ, ಸೋಮೇಶ್ವರ ಎಕ್ಸ್‌ಟೆನ್ಷನ್, ದೊಡ್ಡಬಳ್ಳಾಪುರ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎಸ್. ರಮಣರೆಡ್ಡಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

# ವಿಶೇಷ ರಾಜ್ಯಪತ್ರ

| ಭಾಗ – **IV-A** | ಬೆಂಗಳೂರು, ಬುಧವಾರ, ಸೆಪ್ಟೆಂಬರ್ ೨೬, ೨೦೧೨ (ಆಶ್ವಯುಜ ೪, ಶಕ ವರ್ಷ ೧೯೩೪) | ನಂ. ೬೨೭ |
|---|---|---|

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಗ್ರಾಅಪ 227 ಜಿಪಸ 2012, ಬೆಂಗಳೂರು, ದಿನಾಂಕ: 26–09–2012**

ಕರ್ನಾಟಕ ಪಂಚಾಯತ್ ರಾಜ್ (ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಹುದ್ದೆಗಳ ಮೀಸಲಾತಿ) ನಿಯಮಗಳು, 2005 ಮತ್ತು (ತಿದ್ದುಪಡಿ) ನಿಯಮಗಳು, 2010 ರಲ್ಲಿ ನಿಗಧಿಪಡಿಸಿದ ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 138(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಜನವರಿ 2011 ರಲ್ಲಿ ರಚಿತವಾಗಿರುವ ತಾಲ್ಲೂಕು ಪಂಚಾಯತಿಗಳ ಎರಡನೇ ಅವಧಿಗೆ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಹುದ್ದೆಗಳಿಗೆ ಮೀಸಲಾತಿಯನ್ನು ನಿಗಧಿಗೊಳಿಸಬೇಕಾಗಿದ್ದು, ಅದರಂತೆ ಈ ಕೆಳಕಂಡ ಜಿಲ್ಲೆಯ ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಹುದ್ದೆಗಳಲ್ಲಿ ಅನುಸೂಚಿತ ಪಂಗಡ / ಅನುಸೂಚಿತ ಜಾತಿ/ ಹಿಂದುಳಿದ ವರ್ಗಗಳು ಮತ್ತು ಮಹಿಳೆಯರಿಗೆ ಹಾಗೂ ಅದರೊಂದಿಗೆ ಮೀಸಲಿರಿಸದವರಿಗೆ ಹಂಚಿಕೆಯಾದ ಹುದ್ದೆಗಳು ಈ ಕೆಳಗೆ ನಿರ್ದಿಷ್ಟಪಡಿಸಿದಂತೆ ಇರತಕ್ಕದ್ದೆಂದು ಆದೇಶಿಸಿದೆ.

| ಕ್ರಮ ಸಂಖ್ಯೆ | ಜಿಲ್ಲೆ / ತಾಲ್ಲೂಕು ಪಂಚಾಯಿತಿಯ ಹೆಸರು | ಅಧ್ಯಕ್ಷ ಸ್ಥಾನದ ಮೀಸಲಾತಿ | ಉಪಾಧ್ಯಕ್ಷ ಸ್ಥಾನದ ಮೀಸಲಾತಿ |
|---|---|---|---|
| 1 | 2 | 3 | 4 |
| | ಮಂಡ್ಯ | | |
| 1. | ಕೆ.ಆರ್.ಪೇಟೆ | ಅನುಸೂಚಿತ ಜಾತಿ (ಮ) | ಹಿಂದುಳಿದ ವರ್ಗ – ಬ (ಮ) |
| 2. | ಮದ್ದೂರು | ಹಿಂದುಳಿದ ವರ್ಗ – ಅ (ಮ) | ಅನುಸೂಚಿತ ಜಾತಿ |
| 3. | ಮಳವಳ್ಳಿ | ಸಾಮಾನ್ಯ | ಸಾಮಾನ್ಯ (ಮ) |
| 4. | ಮಂಡ್ಯ | ಸಾಮಾನ್ಯ (ಮ) | ಅನುಸೂಚಿತ ಜಾತಿ |
| 5. | ನಾಗಮಂಗಲ | ಅನುಸೂಚಿತ ಜಾತಿ | ಹಿಂದುಳಿದ ವರ್ಗ – ಅ (ಮ) |
| 6. | ಪಾಂಡವಪುರ | ಸಾಮಾನ್ಯ | ಹಿಂದುಳಿದ ವರ್ಗ – ಬ (ಮ) |
| 7. | ಶ್ರೀರಂಗಪಟ್ಟಣ | ಅನುಸೂಚಿತ ಜಾತಿ | ಸಾಮಾನ್ಯ (ಮ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಾರ್ಗರೇಟ್ ಲೀನಾ ನರೋನ್ಹ**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

# ವಿಶೇಷ ರಾಜ್ಯಪತ್ರ

**ಭಾಗ – IV-A** | **ಬೆಂಗಳೂರು, ಬುಧವಾರ, ಸೆಪ್ಟೆಂಬರ್ ೨೬, ೨೦೧೨ (ಆಶ್ವಯುಜ ೪, ಶಕ ವರ್ಷ ೧೯೩೪)** | **ನಂ. ೬೨೮**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಗ್ರಾಅಪ 227 ಜಿಪಸ 2012, ಬೆಂಗಳೂರು, ದಿನಾಂಕ: 26–09–2012**

ಕರ್ನಾಟಕ ಪಂಚಾಯತ್ ರಾಜ್ (ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಹುದ್ದೆಗಳ ಮೀಸಲಾತಿ) ನಿಯಮಗಳು, 2005 ಮತ್ತು (ತಿದ್ದುಪಡಿ) ನಿಯಮಗಳು, 2010 ರಲ್ಲಿ ನಿಗಧಿಪಡಿಸಿದ ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 138(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಜನವರಿ 2011 ರಲ್ಲಿ ರಚಿತವಾಗಿರುವ ತಾಲ್ಲೂಕು ಪಂಚಾಯತಿಗಳ ಎರಡನೇ ಅವಧಿಗೆ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಹುದ್ದೆಗಳಿಗೆ ಮೀಸಲಾತಿಯನ್ನು ನಿಗಧಿಗೊಳಿಸಬೇಕಾಗಿದ್ದು, ಅದರಂತೆ ಈ ಕೆಳಕಂಡ ಜಿಲ್ಲೆಯ ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಹುದ್ದೆಗಳಲ್ಲಿ ಅನುಸೂಚಿತ ಪಂಗಡ / ಅನುಸೂಚಿತ ಜಾತಿ/ ಹಿಂದುಳಿದ ವರ್ಗಗಳು ಮತ್ತು ಮಹಿಳೆಯರಿಗೆ ಹಾಗೂ ಅದರೊಂದಿಗೆ ಮೀಸಲಿರಿಸದವರಿಗೆ ಹಂಚಿಕೆಯಾದ ಹುದ್ದೆಗಳು ಈ ಕೆಳಗೆ ನಿರ್ದಿಷ್ಟಪಡಿಸಿದಂತೆ ಇರತಕ್ಕದ್ದೆಂದು ಆದೇಶಿಸಿದೆ.

| ಕ್ರಮ ಸಂಖ್ಯೆ | ಜಿಲ್ಲೆ/ ತಾಲ್ಲೂಕು ಪಂಚಾಯಿತಿಯ ಹೆಸರು | ಅಧ್ಯಕ್ಷ ಸ್ಥಾನದ ಮೀಸಲಾತಿ | ಉಪಾಧ್ಯಕ್ಷ ಸ್ಥಾನದ ಮೀಸಲಾತಿ |
|---|---|---|---|
| 1 | 2 | 3 | 4 |
| | ರಾಯಚೂರು | | |
| 1. | ದೇವದುರ್ಗ | ಸಾಮಾನ್ಯ | ಅನುಸೂಚಿತ ಪಂಗಡ |
| 2. | ಲಿಂಗಸಗೂರು | ಸಾಮಾನ್ಯ (ಮ) | ಅನುಸೂಚಿತ ಜಾತಿ |

| ಕ್ರಮ ಸಂಖ್ಯೆ | ಜಿಲ್ಲೆ/ ತಾಲ್ಲೂಕು ಪಂಚಾಯಿತಿಯ ಹೆಸರು | ಅಧ್ಯಕ್ಷ ಸ್ಥಾನದ ಮೀಸಲಾತಿ | ಉಪಾಧ್ಯಕ್ಷ ಸ್ಥಾನದ ಮೀಸಲಾತಿ |
|---|---|---|---|
| 1 | 2 | 3 | 4 |
| 3. | ಮಾನ್ವಿ | ಸಾಮಾನ್ಯ (ಮ) | ಅನುಸೂಚಿತ ಪಂಗಡ |
| 4. | ರಾಯಚೂರು | ಸಾಮಾನ್ಯ | ಹಿಂದುಳಿದ ವರ್ಗ – ಅ (ಮ) |
| 5. | ಸಿಂಧನೂರು | ಹಿಂದುಳಿದ ವರ್ಗ – ಅ (ಮ) | ಅನುಸೂಚಿತ ಜಾತಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಾರ್ಗರೇಟ್ ಲೀನಾ ನರೋನ್ಹ**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

# ವಿಶೇಷ ರಾಜ್ಯಪತ್ರ

**ಭಾಗ – IV-A | ಬೆಂಗಳೂರು, ಬುಧವಾರ, ಸೆಪ್ಟೆಂಬರ್ ೨೬, ೨೦೧೨ (ಆಶ್ವಯುಜ ೪, ಶಕ ವರ್ಷ ೧೯೩೪) | ನಂ. ೬೭೯**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಗ್ರಾಅಪ 227 ಜಿಪಸ 2012, ಬೆಂಗಳೂರು, ದಿನಾಂಕ: 26–09–2012**

ಕರ್ನಾಟಕ ಪಂಚಾಯತ್ ರಾಜ್ (ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಹುದ್ದೆಗಳ ಮೀಸಲಾತಿ) ನಿಯಮಗಳು, 2005 ಮತ್ತು (ತಿದ್ದುಪಡಿ) ನಿಯಮಗಳು, 2010 ರಲ್ಲಿ ನಿಗಧಿಪಡಿಸಿದ ಹಾಗೂ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 138(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಜನವರಿ 2011 ರಲ್ಲಿ ರಚಿತವಾಗಿರುವ ತಾಲ್ಲೂಕು ಪಂಚಾಯತಿಗಳ ಎರಡನೇ ಅವಧಿಗೆ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಹುದ್ದೆಗಳಿಗೆ ಮೀಸಲಾತಿಯನ್ನು ನಿಗಧಿಗೊಳಿಸಬೇಕಾಗಿದ್ದು, ಅದರಂತೆ ಈ ಕೆಳಕಂಡ ಜಿಲ್ಲೆಯ ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಹುದ್ದೆಗಳಲ್ಲಿ ಅನುಸೂಚಿತ ಪಂಗಡ / ಅನುಸೂಚಿತ ಜಾತಿ/ ಹಿಂದುಳಿದ ವರ್ಗಗಳು ಮತ್ತು ಮಹಿಳೆಯರಿಗೆ ಹಾಗೂ ಅದರೊಂದಿಗೆ ಮೀಸಲಿರಿಸದವರಿಗೆ ಹಂಚಿಕೆಯಾದ ಹುದ್ದೆಗಳು ಈ ಕೆಳಗೆ ನಿರ್ದಿಷ್ಟಪಡಿಸಿದಂತೆ ಇರತಕ್ಕದ್ದೆಂದು ಆದೇಶಿಸಿದೆ.

| ಕ್ರಮ ಸಂಖ್ಯೆ | ಜಿಲ್ಲೆ / ತಾಲ್ಲೂಕು ಪಂಚಾಯಿತಿಯ ಹೆಸರು | ಅಧ್ಯಕ್ಷ ಸ್ಥಾನದ ಮೀಸಲಾತಿ | ಉಪಾಧ್ಯಕ್ಷ ಸ್ಥಾನದ ಮೀಸಲಾತಿ |
|---|---|---|---|
| 1 | 2 | 3 | 4 |
| | **ಗದಗ** | | |
| 1 | ಗದಗ | ಸಾಮಾನ್ಯ | ಅನುಸೂಚಿತ ಪಂಗಡ (ಮ) |
| 2 | ಮುಂಡರಗಿ | ಅನುಸೂಚಿತ ಜಾತಿ (ಮ) | ಹಿಂದುಳಿದ ವರ್ಗ – ಅ |
| 3 | ನರಗುಂದ | ಹಿಂದುಳಿದ ವರ್ಗ – ಅ | ಸಾಮಾನ್ಯ (ಮ) |
| 4 | ರೋಣ | ಅನುಸೂಚಿತ ಜಾತಿ (ಮ) | ಸಾಮಾನ್ಯ |
| 5 | ಶಿರಹಟ್ಟಿ | ಹಿಂದುಳಿದ ವರ್ಗ – ಅ | ಸಾಮಾನ್ಯ (ಮ) |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಾರ್ಗರೇಟ್ ಲೀನಾ ನರೋನ್ಹ**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

# ವಿಶೇಷ ರಾಜ್ಯಪತ್ರ

| ಭಾಗ – IV-A | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೭, ೨೦೧೨ (ಆಶ್ವಯುಜ ೫, ಶಕ ವರ್ಷ ೧೯೩೪) | ನಂ. ೬೮೦ |
|---|---|---|

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 132 ಸಿಎಸ್‌ಎಸ್ 2008, ಬೆಂಗಳೂರು, ದಿನಾಂಕ: 26.09.2012**

ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಒ 132 ಸಿಎಸ್‌ಎಸ್ 2008 ದಿನಾಂಕ 11.11.2008ರಲ್ಲಿ **ಕೋಲಾರ ಜಿಲ್ಲಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘ ನಿ. ಕೋಲಾರ** ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಎನ್. ರಾಜೇಶ್ ಬಿನ್ ನಂದೀಶಪ್ಪ, ಶ್ರೀಮತಿ ಟಿ.ಎನ್. ಶೋಭಾರಾಣಿ ಕೋಂ ಟಿ.ಎಸ್. ನಾಗಪ್ರಕಾಶ್ ಮತ್ತು ಶ್ರೀ ಎನ್.ವಿ. ವೀರಭದ್ರಯ್ಯ ಲೇಟ್ ವೀರಭದ್ರಪ್ಪ ಇವರ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರೆದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು **ಕೋಲಾರ ಜಿಲ್ಲಾ ಸರಬರಾಜು ಮತ್ತು ಮಾರಾಟ ಸಹಕಾರ ಸಂಘ ನಿ. ಕೋಲಾರ** ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಸರ್ಕಾರದ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡುತ್ತದೆ.

1. ಶ್ರೀ ರವಿಕುಮಾರ್ ಬಿನ್ ಟಿ.ಎಸ್.ಗೋವಿಂದರಾಜು, ನೀಲಮ್ಮ ಕಂಪೌಂಡ್, ಗೀತಾ ರಸ್ತೆ, 6ನೇ ಕ್ರಾಸ್ ಡೌನ್, ಕೆ.ಜಿ.ಎಫ್.
2. ಶ್ರೀಮತಿ ಪಂಕಜ ಶೇಖರ್ ಕೋಂ ಚಂದ್ರಶೇಖರ್, #492, ಶ್ರೀ ವೇಣುಗೋಪಾಲಸ್ವಾಮಿ ದೇವಸ್ಥಾನದ ರಸ್ತೆ, ಚಿಕ್ಕಬಳ್ಳಾಪುರ.
3. ಶ್ರೀ ನಾಗರಾಜು ಬಿನ್ ಗುರಪ್ಪ, ರಾಮಸಂದ್ರ ಗ್ರಾಮ ಮತ್ತು ಅಂಚೆ, ಹುತ್ತೂರು ಹೋಬಳಿ, ಕೋಲಾರ ತಾಲ್ಲೂಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎಸ್. ರಮಣರೆಡ್ಡಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

# ವಿಶೇಷ ರಾಜ್ಯಪತ್ರ

| ಭಾಗ – IV-A | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೭, ೨೦೧೨ (ಆಶ್ವಯುಜ ೫, ಶಕ ವರ್ಷ ೧೯೩೪) | ನಂ. ೬೮೧ |
|---|---|---|

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 20 ಸಿಎಸ್‌ಎಸ್ 2012, ಬೆಂಗಳೂರು, ದಿನಾಂಕ: 26.09.2012**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು **ಶ್ರೀ ವಿರುಪಾಕ್ಷಪ್ಪ ಬಿನ್ ಜಿ. ಮಲ್ಲಿಕಾರ್ಜುನ, ಜಿ. ನಾಗೇನಹಳ್ಳಿ, ಬ್ಯಾಲಚಿಂತ್ ಅಂಚೆ, ಬಳ್ಳಾರಿ ತಾಲ್ಲೂಕು** ಇವರನ್ನು **ಬಳ್ಳಾರಿ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ ನಿ., (ಜನತಾ ಬಜಾರ್)** ಬಳ್ಳಾರಿ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಸರ್ಕಾರದ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎಸ್. ರಮಣರೆಡ್ಡಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

# ವಿಶೇಷ ರಾಜ್ಯಪತ್ರ

| ಭಾಗ – IV-A | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೭, ೨೦೧೨ (ಆಶ್ವಯುಜ ೫, ಶಕ ವರ್ಷ ೧೯೩೪) | ನಂ. ೬೮೨ |
|---|---|---|

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 78 ಸಿಎಸ್ಎಸ್ 2009, ಬೆಂಗಳೂರು, ದಿನಾಂಕ: 26.09.2012**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು **ಗುಲ್ಬರ್ಗಾ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ ನಿ., (ಜನತಾ ಬಜಾರ್) ಗುಲ್ಬರ್ಗಾ** ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಸರ್ಕಾರದ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡುತ್ತದೆ.

1. ಶ್ರೀ ಕ್ಷೇಮಲಿಂಗ ಬಿನ್ ಕಾಶಪ್ಪಾ ಪಾಟೀಲ್, ಮು.ಕಣ್ಣೂರು, ಬಬಲಾದ ಅಂಚೆ, ಗುಲ್ಬರ್ಗಾ ತಾ.
2. ಶ್ರೀಮತಿ ಭಾರತಿ ಬಾಯಿ ಕೋಂ ಅಂಬಾರಾವ್ ಜಿವಣಗಿ, ಪ್ಲಾಟ್ ನಂ.348, ಸಿಐ.ಬಿ.ಕಾಲೋನಿ, ಬಸ್ ನಿಲ್ದಾಣ ಹಿಂಭಾಗ, ಗುಲ್ಬರ್ಗಾ ಜಿಲ್ಲೆ.
3. ಶ್ರೀ ಮದನ್ ಬಂಡೆ ಬಿನ್ ಶ್ರೀ ಮಾರುತಿ, ಬಿದ್ದಪೂರ ಹನುಮಾನ ದೇವಸ್ಥಾನದ ಹತ್ತಿರ, ಬಿದ್ದಪೂರ ಕಾಲೋನಿ, ಹೈಕೋರ್ಟ್ ರಿಂಗ್ ರೋಡ್, ಗುಲ್ಬರ್ಗಾ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎಸ್. ರಮಣರೆಡ್ಡಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

# ವಿಶೇಷ ರಾಜ್ಯಪತ್ರ

| ಭಾಗ – IV-A | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೭, ೨೦೧೨ (ಆಶ್ವಯುಜ ೫, ಶಕ ವರ್ಷ ೧೯೩೪) | ನಂ. ೬೮೩ |
|---|---|---|

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ಅಧಿಸೂಚನೆ

**ಸಂ: ಗ್ರಾಅಪ : 05 : ಜಿಪಸ 2011 (P), ಬೆಂಗಳೂರು ದಿನಾಂಕ: 27–09–2012**

ತುಮಕೂರು ಜಿಲ್ಲಾ ಪಂಚಾಯತಿ ವ್ಯಾಪ್ತಿಯ ತಿಪಟೂರು ತಾಲ್ಲೂಕಿನ 32–ರಂಗಾಪುರ ಜಿಲ್ಲಾಪಂಚಾಯತಿ ಮತಕ್ಷೇತ್ರದ ಜಿಲ್ಲಾ ಪಂಚಾಯತಿ ತೆರವಾದ ಸದಸ್ಯ ಸ್ಥಾನವೆಂದು ಘೋಷಿಸಿರುವುದರಿಂದ 1993 ರ ಕರ್ನಾಟಕ ಪಂಚಾಯತ್ ರಾಜ್ (ಚುನಾವಣೆಯನ್ನು ನಡೆಸುವ) ನಿಯಮಗಳು, 12ನೇ ನಿಯಮದ ಉಪನಿಯಮ (2) ರ ಮೇರೆಗೆ ತುಮಕೂರು ಜಿಲ್ಲಾಧಿಕಾರಿಯವರು ದಿನಾಂಕ: 26–02–2012 ರಂದು ತುಮಕೂರು ಜಿಲ್ಲಾ ಪಂಚಾಯತಿಗೆ ಉಪ ಚುನಾವಣೆಯನ್ನು ನಡೆಸಲಾದುದರಿಂದ;

ಮತ್ತು ಸದರಿ ಜಿಲ್ಲಾ ಪಂಚಾಯತಿಯ ಮತ ಕ್ಷೇತ್ರದಲ್ಲಿ ನಡೆಸಲಾದ ಉಪ ಚುನಾವಣೆಯ ಫಲಿತಾಂಶವನ್ನು ಸಂಬಂಧಪಟ್ಟ ಚುನಾವಣಾಧಿಕಾರಿಗಳು ಘೋಷಿಸಿರುವುದರಿಂದ,

ಆದುದರಿಂದ 1993 ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ (1993ರ ಕರ್ನಾಟಕ ಅಧಿನಿಯಮ 14) 172 ನೇ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ತುಮಕೂರು ಜಿಲ್ಲಾ ಪಂಚಾಯತಿಯಲ್ಲಿ ಉಂಟಾದ ಖಾಲಿ ಸ್ಥಾನವನ್ನು ಭರ್ತಿ ಮಾಡಲು ಅವನು ಯಾರ ಸ್ಥಾನದಲ್ಲಿ ಚುನಾಯಿತನಾಗಿರುವನೋ ಆ ಸ್ಥಾನವು ತೆರವಾಗದೇ ಇದ್ದಿದ್ದರೆ ಆ ಸದಸ್ಯನು ಎಲ್ಲಿಯವರೆಗೆ ಹುದ್ದೆಯನ್ನು ಧಾರಣ ಮಾಡುತ್ತಿದ್ದನೋ ಆ ಅವಧಿಯವರೆಗೆ ಮಾತ್ರ ಹುದ್ದೆಯನ್ನು ಧಾರಣ ಮಾಡತಕ್ಕದ್ದು ಎಂದು ನಮೂದಿಸಿರುವುದರಿಂದ ಕರ್ನಾಟಕ ಸರ್ಕಾರವು ಉಳಿದ ಅವಧಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಕೆಳಗೆ ನಮೂದಿಸಿದಂತೆ ಅಧಿಸೂಚಿಸಿದೆ.

| ಕ್ರ. ಸಂ. | ಜಿಲ್ಲಾ ಪಂಚಾಯತಿ ಕ್ಷೇತ್ರದ ಹೆಸರು | 2010ರಲ್ಲಿ ನಿಗಧಿಪಡಿಸಿರುವ ಮೀಸಲಾತಿ ವರ್ಗ | ಆಯ್ಕೆಯಾದ ಸದಸ್ಯರ ಹೆಸರು ಶ್ರೀ:ಶ್ರೀಮತಿ | ಪ್ರತಿನಿಧಿಸಿದ ರಾಜಕೀಯ ಪಕ್ಷದ ಹೆಸರು |
|---|---|---|---|---|
| | **ತುಮಕೂರು** | | | |
| 1 | 32–ರಂಗಾಪುರ ಜಿಲ್ಲಾ ಪಂಚಾಯತಿ ಕ್ಷೇತ್ರ | ಸಾಮಾನ್ಯ | ಶ್ರೀ ತ್ರಿಯಾಂಬಕ ಬಿನ್ ಶಂಕರಪ್ಪ, ಅನಗೊಂಡನಹಳ್ಳಿ, ರಂಗಾಪುರ ಅಂಚೆ, ಕಸಬಾ ಹೋಬಳಿ, ತಿಪಟೂರು ತಾಲ್ಲೂಕು, ತುಮಕೂರು ಜಿಲ್ಲೆ. | ಭಾರತೀಯ ರಾಷ್ಟ್ರೀಯ ಕಾಂಗ್ರೇಸ್ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಾರ್ಗರೇಟ್ ಲೀನಾ ನರೋನ್ಹ**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

# ವಿಶೇಷ ರಾಜ್ಯಪತ್ರ

| ಭಾಗ – IV-A | ಬೆಂಗಳೂರು, ಶುಕ್ರವಾರ, ಸೆಪ್ಟೆಂಬರ್ ೨೮, ೨೦೧೨ (ಆಶ್ವಯುಜ ೬, ಶಕ ವರ್ಷ ೧೯೩೪) | ನಂ. ೬೮೫ |
|---|---|---|

## ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಾಇ 114 ಎಲ್‌ಡಬ್ಲ್ಯೂಎ 2011, ಬೆಂಗಳೂರು, ದಿನಾಂಕ: 28.9.2012**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 119 ಎಲ್‌ಡಬ್ಲ್ಯೂಎ 2008, ದಿನಾಂಕ: 16–10–2008 ರಲ್ಲಿ ಕರ್ನಾಟಕ ರಾಜ್ಯ ಗುತ್ತಿಗೆ ಕಾರ್ಮಿಕರ ಸಲಹಾ ಮಂಡಳಿಯನ್ನು 3 ವರ್ಷಗಳ ಅವಧಿಗೆ ರಚಿಸಿದ್ದು, ಇದರ ಅವಧಿಯು ದಿನಾಂಕ: 15.10.2011ಕ್ಕೆ ಮುಕ್ತಾಯಗೊಂಡಿರುತ್ತದೆ. ಪ್ರಸ್ತುತ ಸದರಿ ಮಂಡಳಿಯನ್ನು ಪುನರ್ ರಚಿಸುವ ಅವಶ್ಯಕತೆ ಇರುವುದರಿಂದ ಗುತ್ತಿಗೆ ಕಾರ್ಮಿಕರ [ನಿಯಂತ್ರಣ ಮತ್ತು ರದ್ಧತಿ] ಕಾಯ್ದೆ 1970 ರ ಸೆಕ್ಷನ್ 4 ಹಾಗೂ ಗುತ್ತಿಗೆ ಕಾರ್ಮಿಕ [ನಿಯಂತ್ರಣ ಮತ್ತು ರದ್ಧತಿ] [ಕರ್ನಾಟಕ] ನಿಯಮಗಳು 1974ರ ನಿಯಮ 3 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡಂತೆ ಕರ್ನಾಟಕ ರಾಜ್ಯ ಗುತ್ತಿಗೆ ಕಾರ್ಮಿಕ ಸಲಹಾ ಮಂಡಳಿಯನ್ನು ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ 3 ವರ್ಷಗಳ ಅವಧಿಗೆ ಪುನರ್ ರಚಿಸಿದೆ.

| ಕ್ರ. ಸಂ. | ಸದಸ್ಯರ ವಿವರ | ಪದನಾಮ |
|---|---|---|
| 1 | ಕಾರ್ಮಿಕ ಸಚಿವರು | ಅಧ್ಯಕ್ಷರು |
| 2 | ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ, ಬೆಂಗಳೂರು | ಸದಸ್ಯರು |
| 3 | ಕಾರ್ಮಿಕ ಆಯುಕ್ತರು, ಕಾರ್ಮಿಕ ಇಲಾಖೆ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29. | ಸದಸ್ಯರು |
| | **ರಾಜ್ಯ ಸಾರ್ವಜನಿಕ ಉದ್ದಿಮೆಗಳ ಪ್ರತಿನಿಧಿಗಳು** | |
| 4 | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಬೆಂಗಳೂರು. | ಸದಸ್ಯರು |
| | **ಖಾಸಗಿ ಉದ್ದಿಮೆಗಳ ಪ್ರತಿನಿಧಿಗಳು** | |
| 5 | ಶ್ರೀ ರವಿಕುಮಾರ್ ಸೋಲೊಮನ್, ವೈಸ್ ಪ್ರೆಸಿಡೆಂಟ್, ಹೆಚ್.ಆರ್. ಮೆ: ವೊಲ್ವೋ ಇಂಡಿಯಾ ಪ್ರೈ.ಲಿ. ನಂ 65/2, ಫರಿನ್ ಬಿಲ್ಡಿಂಗ್, 5ನೇ ಮಹಡಿ, ಬಾಗ್‌ಮನೆ ಟೆಕ್‌ಪಾರ್ಕ್, ಸಿ.ವಿ. ರಾಮನ್ ನಗರ, ಬೆಂಗಳೂರು-560 095. | ಸದಸ್ಯರು |
| 6 | ಶ್ರೀ ಎಂ.ವಿ. ಶ್ರೀಗಣೇಶ್, ಜನರಲ್ ಮ್ಯಾನೇಜರ್, ಕಾರ್ಪೋರೇಟ್ ಹೆಚ್.ಆರ್. ಮಣಿಪಾಲ್ ಗ್ರೂಪ್ ಆಫ್ ಕಂಪನೀಸ್, ನಂ: 69/3, ಪೊಲೀಸ್ ಸ್ಟೇಷನ್ ಎದುರು, ಶಂಕರಮಠ ರಸ್ತೆ, ಬಸವನಗುಡಿ, ಬೆಂಗಳೂರು-560 004. | ಸದಸ್ಯರು |
| | **ಗುತ್ತಿಗೆದಾರರ ಪ್ರತಿನಿಧಿಗಳು** | |
| 7 | ಶ್ರೀ ಆರ್. ಚಂದ್ರಮೋಹನ್, ಬಿ.ಇ. ಎಂ.ಎಸ್ [ಯು.ಎಸ್.ಎ]<br>ಬಿನ್ ಎಂ.ವಿ. ರಾಮಸ್ವಾಮಿ, ಆನಂದ್ ಗ್ರೂಪ್ ಬಿಲ್ಡರ್ಸ್ & ಡೆವಲಪರ್ಸ್, ನಂ: 56, 9ನೇ ಮುಖ್ಯ ರಸ್ತೆ, 3ನೇ ಬ್ಲಾಕ್, ಎಸ್.ಬಿ.ಎಂ. & ಕ್ರೆಡಲ್ ಆಸ್ಪತ್ರೆ ಎದುರು, ಜಯನಗರ, ಬೆಂಗಳೂರು-560 011. | ಸದಸ್ಯರು |
| 8 | ಶ್ರೀ ಹೆಚ್. ಸಂಜೀವಯ್ಯ, ವಕೀಲರು, ಮೈಲಾರಯ್ಯ ಅಸೋಸಿಯೇಟ್ಸ್, ನಂ: 23, ಗ್ರೌಂಡ್ ಫ್ಲೋರ್, ಸೂರಜ್ ಸದನ್ ಅಪಾರ್ಟ್‌ಮೆಂಟ್ಸ್, 2ನೇ ಕ್ರಾಸ್, ಗಾಂಧಿನಗರ, ಬೆಂಗಳೂರು-560 009. | ಸದಸ್ಯರು |
| | **ಸಾರ್ವಜನಿಕ ಉದ್ದಿಮೆಯ ಕಾರ್ಮಿಕರ ಪ್ರತಿನಿಧಿಗಳು** | |
| 9 | ಅಧ್ಯಕ್ಷರು/ಅವರ ಪ್ರತಿನಿಧಿ, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ನೌಕರರ ಸಂಘ, ಕಾವೇರಿ ಭವನ, ಕೆ.ಜಿ. ರಸ್ತೆ, ಬೆಂಗಳೂರು. | ಸದಸ್ಯರು |
| | **ಖಾಸಗಿ ಉದ್ದಿಮೆಯ ಕಾರ್ಮಿಕರ ಸಂಘಗಳ ಪ್ರತಿನಿಧಿಗಳು** | |
| 10 | ಕುಮಾರಿ ಹೆಚ್. ಮಂಗಳಾಂಭ ರಾವ್, ವಕೀಲರು, ನ್ಯಾಷನಲ್ ವೈಸ್ ಪ್ರೆಸಿಡೆಂಟ್, ಭಾರತೀಯ ಮಜ್ದೂರ್ ಸಂಘ, ಕೆ.ಆಫ್: ಬಿ.ಎಂ.ಎಸ್. ಆಫೀಸ್, ಸುಭೇದಾರ್ ಛತ್ರಂ ರಸ್ತೆ, ಗಾಂಧಿನಗರ, ಬೆಂಗಳೂರು-560 009. | ಸದಸ್ಯರು |
| 11 | ಶ್ರೀ ಎಲ್. ಕಾಳಪ್ಪ, ಜನರಲ್ ಸೆಕ್ರೆಟರಿ, ಹೆಚ್.ಎಂ.ಕೆ.ಪಿ. ನಂ. 20, 1ನೇ ಎ ಕ್ರಾಸ್, ನ್ಯೂ ಟೌನ್ ಯಲಹಂಕ, ಬೆಂಗಳೂರು-560 065. | ಸದಸ್ಯರು |
| | **ಗುತ್ತಿಗೆ ಕಾರ್ಮಿಕರ ಪ್ರತಿನಿಧಿಗಳು** | |
| 12 | ಶ್ರೀ ಎಸ್. ಬಾಲನ್, ಅಧ್ಯಕ್ಷರು, ಬಿ.ಬಿ.ಎಂ.ಪಿ. ಕಾಂಟ್ರಾಕ್ಟ್ ಪೌರ ಕಾರ್ಮಿಕರ ಸಂಘ, ನಂ. 6, ಸಿರು ಪಾರ್ಕ್ ರಸ್ತೆ, ಶೇಷಾದ್ರಿಪುರಂ, ಬೆಂಗಳೂರು-560 020. | ಸದಸ್ಯರು |
| 13 | ಶ್ರೀ ವೆಂಕಟೇಶ್, ಜನರಲ್ ಸೆಕ್ರೆಟರಿ, ಬಿಹೆಚ್‌ಇಎಲ್ ಕಾಂಟ್ರಾಕ್ಟ್ ವರ್ಕರ್ಸ್ ಯೂನಿಯನ್ [ರಿ] ಭಾರತ್ ಹೆವಿ ಎಲೆಕ್ಟ್ರಾನಿಕ್ಸ್ ಲಿಮಿಟೆಡ್ [ಬಿಹೆಚ್‌ಇಎಲ್], ಮೈಸೂರು ರಸ್ತೆ, ಬೆಂಗಳೂರು-560 026. | ಸದಸ್ಯರು |
| | | |
| 14 | ಜಂಟಿ ಕಾರ್ಮಿಕ ಆಯುಕ್ತರು [ಕನಿಷ್ಠ ವೇತನ], ಕಾರ್ಮಿಕ ಆಯುಕ್ತರ ಕಛೇರಿ, ಕಾರ್ಮಿಕ ಭವನ, ಬೆಂಗಳೂರು. | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಭುದೇವ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಾರ್ಮಿಕ ಇಲಾಖೆ

ದೂರವಾಣಿ: 22034972

**HEALTH AND FAMILY WELFARE SECRETARIAT**

**NOTIFICATION**

**No: HFW 167 HSM 2012, Bangalore, Dated: 28-09-2012**

The draft of the following rules further to amend the Karnataka medical Department Services (Recruitment) Rules, 1960, which the Government of Karnataka proposes to make in exercise of the powers conferred by sub-section (2) of section 3 read with section 8 of the Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section (2) of section (3) of the said Act, for the information of all persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Health and Family Welfare Department, Vikasa Soudha, Bangalore-560 001.

**DRAFT RULES**

**1. Title and commencement:-** (1) These rules may be called the Karnataka Medical Department Services (Recruitment) (Amendment) Rules, 2012.

(2) They shall come into force from the date of their publication in the Official Gazette.

**2. Amendment of Schedule II:-** In the Karnataka Medical Department Services (Recruitment) Rules, 1960, in Schedule-II, for the category of post of "Staff Nurse" at serial number 15 and the entries relating thereto, the following shall be substituted, namely:-

**3.**

| | | |
|---|---|---|
| "Staff Nurse | (1) Twenty five percent by direct recruitment under category (1), if no suitable person is available for direct recruitment, under category (1), by direct recruitment under category (2). | **(a) For direct recruitment under category (1);-**<br>(i) Must be holder of degree in Nursing (B.Sc) or possess equivalent qualification in nursing.<br>**Age:-** Must not have attained the age of thirty five years. |

| | | |
|---|---|---|
| | (2) Sixty five percent and the remaining posts unfilled under category (1) by direct recruitment under category (2).<br><br>(3) Ten percent by promotion of Junior Health Assistants (Female) | **(b) For direct recruitment under category (2);-**<br><br>(i) Must possess certificate in General Nursing Course of not less than three years duration, recognized by Government; and<br><br>(ii) Must possess a certificate in midwifery or Psychiatric Nursing Course of not less than Six months duration, recognized by Government.<br><br>**Age:-** Must not have attained the age of thirty five years.<br><br>**For Promotion.-**<br><br>(1) Must possess a certificate in General Nursing Course of not less than three years duration recognized by Government;<br><br>(2) Must possess a certificate in midwifery or Psychiatric Nursing Course of not less than Six months duration, recognized by Government; and<br><br>(3) Must have put in a service of not less than Ten years.” |

By Order and in the Name of the Governor of Karnataka,

**I. HEMANATH**
Under Secretary to Government
Health and Family Welfare Department.

# ವಿಶೇಷ ರಾಜ್ಯಪತ್ರ

| ಭಾಗ – **IV-A** | ಬೆಂಗಳೂರು, ಶುಕ್ರವಾರ, ಸೆಪ್ಟೆಂಬರ್ ೨೮, ೨೦೧೨ (ಆಶ್ವಯುಜ ೬, ಶಕ ವರ್ಷ ೧೯೩೪) | ನಂ. ೬೮೬ |
|---|---|---|

## FINANCE SECRETARIAT

## NOTIFICATION

**No. FD 158 CSL 2012, Bangalore, dated: 28.09.2012**

In exercise of the powers conferred by Section 11-A of the Karnataka Tax on Entry of Goods Act, 1979 (Karnataka Act 27 of 1979 ), the Government of Karnataka, being of the opinion that it is necessary in the public interest so to do, hereby exempts the tax payable under the said Act by Toyota Kirloskar Auto Parts Private Limited, Plot No. 21, Bidadi Industrial Area, Ramanagara District, on the entry of following goods for its new engine plant and expanded production capacity of transmission assembly unit sanctioned in Government order No. CI 46 SPI 2011, dated 19th December, 2011 namely:-

(i) Plant and machinery and capital goods including machinery for captive power generation for electricity (DG sets), spares, tools, jigs, fixtures, dies, utilities like boilers and compressors, cranes, material handling equipments, intermediates, semi-finished goods and sub-assembles and such other equipments directly related to production processes (excluding petroleum products) into a local area for

use therein the manufacture of goods for a period of three years from the first day of June, 2011 to thirty first day of May, 2014; and

(ii) input raw materials, components, packing materials and consumables but excluding petroleum products into a local area for use or consumption therein for a period of five years from the first day of September, 2012 to thirty first day of August, 2017.

By order and in the name of the Governor of Karnataka,

**D.R. SHASHIDHAR**
Under Secretary to Government,
Finance Department (C.T-1).

# ವಿಶೇಷ ರಾಜ್ಯಪತ್ರ

| ಭಾಗ – III | ಬೆಂಗಳೂರು, ಶುಕ್ರವಾರ, ಸೆಪ್ಟೆಂಬರ್ ೨೮, ೨೦೧೨ (ಆಶ್ವಯುಜ ೬, ಶಕ ವರ್ಷ ೧೯೩೪) | ನಂ. ೬೮೪ |
|---|---|---|


## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

### ತಿದ್ದುಪಡಿ ಅಧಿಸೂಚನೆ

**ಸಂಖ್ಯೆ: ಸಿಐ 527 ಎಸ್‌ಪಿಕ್ಯೂ 2011, ಬೆಂಗಳೂರು, ದಿನಾಂಕ: 27.09.2012**

ಸರ್ಕಾರವು ಕೆಐಎಡಿ ಕಾಯ್ದೆ 1966ರ ವಿಧಿ 28(4)ರಡಿಯಲ್ಲಿ ತನ್ನ ಅಧಿಸೂಚನೆ ಸಂಖ್ಯೆಃ ಸಿಐ 877 ಎಸ್.ಪಿ.ಕ್ಯೂ. 2007 ದಿನಾಂಕ: 05.11.2008ರನ್ವಯ ಗೊಟ್ಟಿಕೆರೆ ಕೈಗಾರಿಕಾ ಪ್ರದೇಶಕ್ಕೆ ಸಂಪರ್ಕ ಕಲ್ಪಿಸುವ ರಸ್ತೆ ನಿರ್ಮಾಣಕ್ಕಾಗಿ ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಗೊಟ್ಟಿಗೆರೆ ಗ್ರಾಮದ ಸರ್ವೆ ನಂ: 32, 35, 38 ಮತ್ತು 40ರಲ್ಲಿ ಒಟ್ಟು 1–11½ ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಂಡಿದೆ. ಈ ಜಮೀನಿನಲ್ಲಿ ಅಭಿವೃದ್ಧಿ ಅಧಿಕಾರಿಗಳು ರಸ್ತೆ ನಿರ್ಮಾಣ ಮಾಡಿದ ನಂತರ ಅಧಿಸೂಚಿತ ಸರ್ವೆ ನಂ: 38ರ ಜಮೀನು ಪಕ್ಕಾ ಪೋಡಿಯಾಗಿ ರಸ್ತೆ ನಿರ್ಮಾಣವಾಗಿರುವ ಪ್ರದೇಶವು ವಾಸ್ತವವಾಗಿ 38/9ರ ವ್ಯಾಪ್ತಿಯಲ್ಲಿ ಬಂದಿರುವುದು ಮತ್ತು ಅಧಿಸೂಚಿಸಲ್ಪಟ್ಟಿರುವ 38/6ರ ಜಮೀನು ರಸ್ತೆ ನಿರ್ಮಾಣ ಪ್ರದೇಶದಿಂದ ಹೊರಗಿರುವುದು ಕಂಡು ಬಂದಿದೆ ಮತ್ತು ಸರ್ವೆ ನಂ: 38/5ರಲ್ಲಿ 0–05 ಗುಂಟೆ ಜಮೀನು ಅಧಿಸೂಚಿಸಲ್ಪಟ್ಟಿದ್ದರೂ ಸಹ ಪ್ರಸ್ತುತ ರಸ್ತೆ ನಿರ್ಮಾಣವಾಗಿರುವ ಪ್ರದೇಶದಲ್ಲಿ 0–02 ಗುಂಟೆ ಜಮೀನು ಮಾತ್ರ ಉಪಯೋಗವಾಗಿದ್ದು, ಉಳಿಕೆ 0–03 ಗುಂಟೆ ಜಮೀನು ರಸ್ತೆಯಿಂದ ಹೊರಗಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ರಸ್ತೆ ನಿರ್ಮಾಣವಾಗಿರುವ ಪ್ರದೇಶದ ವ್ಯಾಪ್ತಿಯಲ್ಲಿ ಬಂದಿರುವ ಸರ್ವೆ ನಂ: 38/9ರ ಜಮೀನನ್ನು ಅಧಿಸೂಚನೆಯಲ್ಲಿ ತರಲು ಮತ್ತು ರಸ್ತೆ ನಿರ್ಮಾಣದ ಹೊರಗಿರುವ 38/6ರ ಜಮೀನನ್ನು ಹಾಗೂ ಸರ್ವೆ ನಂ: 38/5ರಲ್ಲಿ ರಸ್ತೆಯಿಂದ ಹೊರಗಿರುವ 0–03 ಗುಂಟೆ ಜಮೀನನ್ನು ಸ್ವಾಧೀನ ಪ್ರಕ್ರಿಯೆಯಿಂದ ಕೈಬಿಡಲು ವಿಧಿ 28(4)ರ ಅಧಿಸೂಚನೆಗೆ ತಿದ್ದುಪಡಿ ಹೊರಡಿಸುವ ಅಗತ್ಯವಿದೆ. ಅಂತೆಯೇ ಈ ಕೆಳಗಿನಂತೆ ತಿದ್ದುಪಡಿ ಹೊರಡಿಸಲಾಗಿದೆ.

**ಗ್ರಾಮ : ಗೊಟ್ಟಿಕೆರೆ    ಹೋಬಳಿ : ಹುತ್ರಿದುರ್ಗ    ತಾಲ್ಲೂಕು : ಕುಣಿಗಲ್    ಜಿಲ್ಲೆ : ತುಮಕೂರು**

| ವಿಧಿ 28(4) ರ ಅಧಿಸೂಚನೆಯಂತೆ | | | | | | ತಿದ್ದುಪಡಿಯಂತೆ | | | | | |
|---|---|---|---|---|---|---|---|---|---|---|---|
| ಕ್ರ ಸಂ | ಖಾತೆದಾರರು ಮತ್ತು ಅನುಭವದಾರರ ಹೆಸರು | ಸ್ವಾಧೀನಪಡಿಸಿಕೊಂಡ ಜಮೀನಿನ ವಿವರ | | | | ಕ್ರ ಸಂ | ಖಾತೆದಾರರು ಮತ್ತು ಅನುಭವದಾರರ ಹೆಸರು | ಸ್ವಾಧೀನಪಡಿಸಿಕೊಂಡ ಜಮೀನಿನ ವಿವರ | | | |
| | | ಸರ್ವೆ ನಂ. | ವಿಸ್ತೀರ್ಣ ಎ–ಗು | ಖರಾಬ್ ಎ–ಗು | ಐನ್ ಎ–ಗು | | | ಸರ್ವೆ ನಂ. | ವಿಸ್ತೀರ್ಣ ಎ–ಗು | ಖರಾಬ್ ಎ–ಗು | ಐನ್ ಎ–ಗು |
| 1 | 2 | 3 | 4 | 5 | 6 | 1 | 2 | 3 | 4 | 5 | 6 |
| 4 | ಟಿ. ಶ್ರೀನಿವಾಸ್ ಬಿನ್ ಲೇಟ್ ತಿಮ್ಮಪ್ಪ, ಎಂ.ಡಿ. ಹೊನ್ನಪ್ಪ ಬಿನ್ ಕರಿಯಪ್ಪ | 38/5ರ ಪೈಕಿ | 0–05 | –– | 0–05 | 4 | ಟಿ. ಶ್ರೀನಿವಾಸ್ ಬಿನ್ ಲೇಟ್ ತಿಮ್ಮಪ್ಪ, ಎಂ.ಡಿ. ಹೊನ್ನಪ್ಪ ಬಿನ್ ಕರಿಯಪ್ಪ | 38/5ರ ಪೈಕಿ | 0–02 | –– | 0–02 |

| ವಿಧಿ 28(4) ರ ಅಧಿಸೂಚನೆಯಂತೆ | | | | | | ತಿದ್ದುಪಡಿಯಂತೆ | | | | | |
|---|---|---|---|---|---|---|---|---|---|---|---|
| ಕ್ರ. ಸಂ | ಖಾತೆದಾರರು ಮತ್ತು ಅನುಭವದಾರರ ಹೆಸರು | ಸ್ವಾಧೀನಪಡಿಸಿಕೊಂಡ ಜಮೀನಿನ ವಿವರ | | | | ಕ್ರ. ಸಂ | ಖಾತೆದಾರರು ಮತ್ತು ಅನುಭವದಾರರ ಹೆಸರು | ಸ್ವಾಧೀನಪಡಿಸಿಕೊಂಡ ಜಮೀನಿನ ವಿವರ | | | |
| | | ಸರ್ವೆ ನಂ. | ವಿಸ್ತೀರ್ಣ ಎ–ಗು | ಖರಾಬ್ ಎ–ಗು | ಐನ್ ಎ–ಗು | | | ಸರ್ವೆ ನಂ. | ವಿಸ್ತೀರ್ಣ ಎ–ಗು | ಖರಾಬ್ ಎ–ಗು | ಐನ್ ಎ–ಗು |
| **1** | **2** | **3** | **4** | **5** | **6** | **1** | **2** | **3** | **4** | **5** | **6** |
| 5 | ಟಿ. ಶ್ರೀನಿವಾಸ್ ಬಿನ್ ಲೇಟ್ ತಿಮ್ಮಪ್ಪ, ಎಂ.ಆರ್. ಅಶ್ವತ್ಥಯ್ಯ ಬಿನ್ ರಾಮಯ್ಯ | 38/6ರ ಪೈಕಿ | 0–14 | –– | 0–14 | 5 | ಟಿ. ಶ್ರೀನಿವಾಸ್ ಬಿನ್ ಲೇಟ್ ತಿಮ್ಮಪ್ಪ, ಎಂ.ಆರ್. ಅಶ್ವತ್ಥಯ್ಯ ಬಿನ್ ರಾಮಯ್ಯ | 38/9ರ ಪೈಕಿ | 0–16¼ | 0–00¼ | 0–16 |
| **ಒಟ್ಟು** | | | **0–19** | **––** | **0–19** | **ಒಟ್ಟು** | | | **0–18½** | **0–00¼** | **0–18** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು